# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

ರಿಜಿಸ್ಟರ್ಡ್ ನಂ. ಆರ್‌ಎನ್‌ಎಸ್ - 19

4 ನೇ ವರ್ಷ 39ನೇ ಸಂಚಿಕೆ ಕೊಪ್ಪ 8-6-1986 ಭಾನುವಾರ ಬೆಲೆ 40 ಪೈಸೆ.


## ಮಕ್ಕಳ ಆರೋಗ್ಯ ತಪಾಸಣೆ ಶಿಬಿರ

ಉತ್ತಮೇಶ್ವರ: ಇಲ್ಲಿನ ಪ್ರಾ.ಆ. ಘಟಕ ಮತ್ತು ಮೈಸೂರು ಬ್ಯಾಂಕ್ ಶಾಖೆಗಳ ಸಂಯುಕ್ತ ಆಶ್ರಯದಲ್ಲಿ 14 ವರ್ಷದೊಳಗಿನ ಮಕ್ಕಳ ಆರೋಗ್ಯ ತಪಾಸಣೆ ಮತ್ತು ಚಿಕಿತ್ಸೆ ಹಾಗೂ 3 ವರ್ಷದೊಳಗಿನ ಮಕ್ಕಳ 'ಶಿಶುಪ್ರದರ್ಶನ' ಇಲ್ಲಿ ಜೂನ್ 6 ರಂದು ನಡೆಯಿತು. 82 ಮಕ್ಕಳಿಗೆ ತಪಾಸಣೆ ಮತ್ತು ಚಿಕಿತ್ಸೆ ನೀಡಲಾಯಿತು. ಕೆಲವು ಕ್ಲಿಷ್ಟವಾದ ಪ್ರಕರಣಗಳನ್ನು ಕೊಪ್ಪ ಸ॥ ಆಸ್ಪತ್ರೆ ಮತ್ತು ಶೃಂಗೇರಿಯ ಧನ್ವಂತರಿ ಆಸ್ಪತ್ರೆಗಳಿಗೆ ಕಳಿಸಲು ಸೂಚಿಸಲಾಯಿತು.

ಶಿಶುಪ್ರದರ್ಶನದಲ್ಲಿ 12 ಮಕ್ಕಳು ಭಾಗವಹಿಸಿದ್ದು, ವಿವೇಕ, ಸತೀಶ ಮತ್ತು ಪೃಥ್ವೀರಾಜ್ ಎಂಬ ಮಕ್ಕಳಿಗೆ ಮೈಸೂರು ಬ್ಯಾಂಕ್ ನೀಡಿದ ಬಹುಮಾನಗಳು ಲಭಿಸಿದವು. ಮಕ್ಕಳ ತಜ್ಞರಾದ ಶೃಂಗೇರಿಯ ಡಾ॥ ಲಕ್ಷ್ಮೀನಾರಾಯಣನ್ ಮತ್ತು ಕೊಪ್ಪದ ಡಾ॥ ಶ್ರೀಧರ ಹಂದೆ ಶಿಬಿರ ನಡೆಸಿಕೊಟ್ಟರು.

## ಶೃಂಗೇರಿ ಕ್ಷೇತ್ರದಲ್ಲಿ ಜಿಲ್ಲಾ ಯುವ ಕಾಂಗ್ರೆ ಅಧ್ಯಕ್ಷರ ಪ್ರವಾಸ

ಕೊಪ್ಪ: ಜಿಲ್ಲಾ ಯುವ ಕಾಂಗ್ರೆ ಅಧ್ಯಕ್ಷರಾಗಿ ಹೊಸದಾಗಿ ನೇಮಕವಾಗಿರುವ ಎಂ. ಎಸ್. ಲಿಂಗಪ್ಪ ಗೌಡರು ತಮ್ಮ ಜಿಲ್ಲಾ ಪ್ರವಾಸದ ಅಂಗವಾಗಿ ಇದೇ ಜೂನ್ 12 ರಂದು ಶೃಂಗೇರಿ ಕ್ಷೇತ್ರದಲ್ಲಿ ಪ್ರವಾಸ ಮಾಡಲಿದ್ದಾರೆ.

ಬ್ಲಾಕ್ ಯುವ ಕಾಂಗ್ರೆ ಸಮಿತಿಗಳ ಪುನರ್ ಸಂಘಟನೆ ಇವರ ಪ್ರವಾಸದ ಪ್ರಮುಖ ಉದ್ದೇಶವೆನ್ನಲಾಗಿದ್ದು, ಎಲ್ಲಾ ತಾ॥ ಸಮಿತಿಗಳಲ್ಲೂ ಕಡೇ ಪಕ್ಷ ಶೇ. 25 ರಷ್ಟಾದರೂ ಮಹಿಳೆಯರು ಪಾಲ್ಗೊಳ್ಳಬೇಕೆಂಬುದು ನೂತನ ಅಧ್ಯಕ್ಷರ ಒಂದು ಗುರಿಯಾಗಿದೆ. ದೇಶದ ಅಭಿವೃದ್ಧಿಯಲ್ಲಿ ಹಾಗೂ ದೀನ–ದಲಿತರ ಏಳಿಗೆಯಲ್ಲಿ ಆಸಕ್ತಿ ಹೊಂದಿರುವ ಮಹಿಳೆಯರು ಈ ಕಾರ್ಯಕ್ಕೆ ಹೆಚ್ಚು ಹೆಚ್ಚು ಮುಂದೆ ಬರಬೇಕೆಂದು ಅವರು ಕರೆ ಕೊಟ್ಟಿದ್ದಾರೆ.

# ಹೆಗ್ಗಾರುಕೊಡಿಗೆ ಬಳಿ ಮನೆಗೆ ನುಗ್ಗಿ ದರೋಡೆ

ಅಗಳಗಂಡಿ: ಇಲ್ಲಿಗೆ ಸಮೀಪದ ಕೊಳಿಗೋಡು ಎಂಬಲ್ಲಿ ಜೂನ್ 4ರ ರಾತ್ರಿ ದರೋಡೆಯ ಪ್ರಯತ್ನವೊಂದು ನಡೆದಿದ್ದು ಈ ಭಾಗದಲ್ಲಿ ತೀವ್ರ ಕುತೂಹಲ ಮತ್ತು ಆತಂಕಗಳನ್ನು ಹುಟ್ಟಿಸಿದೆ.

**ಕೊಳಿಗೋಡು ವೆಂಕಟೇಶರಾವ್ ಎಂಬವರ ಮನೆಗೆ ಅಂದು ರಾತ್ರಿ ದಾರಿ ಕೇಳುವವರಂತೆ ಬಂದ ಮೂವರು ಆಗಂತುಕರು ಅವರನ್ನೂ ಅವರ ಪತ್ನಿ ಮತ್ತು ಒಬ್ಬ ಹುಡುಗನನ್ನೂ ಥಳಿಸಿ, ಅವರ ಕೇಪಿನ ಕೋವಿಯನ್ನು ಕಿತ್ತುಕೊಂಡು ಪರಾರಿಯಾಗಿದ್ದಾರೆ.**

ಘಟನೆ ನಡೆದ ಮರು ದಿನವೇ ಶ್ವಾನದಳವನ್ನು ಕರೆತರಲಾಗಿತ್ತಾದರೂ ಅದಕ್ಕೆ ಮೊದಲು ಸುರಿದ ಮಳೆಯಿಂದಾಗಿ ಯಾವುದೇ ವಾಸನೆಯನ್ನೂ ಅವು ಗ್ರಹಿಸಲಾಗಲಿಲ್ಲ. ಎಸ್ಪಿ, ಡಿವೈಎಸ್ಪಿ ಅವರೂ ಸ್ಥಳಕ್ಕೆ ಭೇಟಿ ಕೊಟ್ಟಿದ್ದರು.

ಇನ್‌ಚಾರ್ಜ್ ಸರ್ಕಲ್ ಇನ್ಸ್‌ಪೆಕ್ಟರ್ ಬಿ. ಜೆ. ಭಂಡಾರಿಯವರ ನೇತೃತ್ವದಲ್ಲಿ ರಚಿಸಲಾಗಿರುವ ವಿಶೇಷ ಪೋಲೀಸ್‌ದಳ ದುಷ್ಕರ್ಮಿಗಳ ಪತ್ತೆಗಾಗಿ ತೀವ್ರ ತನಿಖೆ ನಡೆಸುತ್ತಿದೆ. ಜೂನ್ 8ರ ರಾತ್ರಿಯವರೆಗೂ ದುಷ್ಕರ್ಮಿಗಳ ಪತ್ತೆಯಾಗಿರಲಿಲ್ಲ. ಕೋವಿಯೂ ಸಿಕ್ಕಿಲ್ಲ.

### ನೀರು ಕೇಳಿದರು

ಅಂದು ರಾತ್ರಿ 12–12.30ರ ಹೊತ್ತಿಗೆ ಬಂದು ಕರೆದ ಆಗಂತುಕರು ತಾವು ಹಾಲಂದೂರು ಕಡೆಯವರೆಂದು ಹೇಳಿ, ಶೃಂಗೇಶ್ವರಯ್ಯ ಎಂಬವರ ಮನೆಗೆ ದಾರಿ ಕೇಳಿದರು. ನಂತರ 40–50 ಗಜ ದೂರ ಹೋದವರು ಮರಳಿ ಬಂದು ನೀರು ಕೇಳಿದರು. ವೆಂಕಟೇಶರಾಯರ ಪತ್ನಿ ನೀರು ತರಲು ಒಳಗೆ ಹೋದಾಗ ರಾಯರ ಹತ್ತಿರ ದುಡ್ಡು ಕೊಡುವಂತೆ ಕೇಳಿ ಹಲ್ಲೆ ನಡೆಸಿದರು. ಅಷ್ಟರಲ್ಲಿ ನೀರು ತಂದ ಅವರ ಪತ್ನಿಯ ಮೇಲೆ ಎರಗಿ ತಾಳಿ ಕಿತ್ತುಕೊಂಡರು. ಮತ್ತೊಬ್ಬ ಹುಡುಗನನ್ನೂ ತೀವ್ರವಾಗಿ, ಪ್ರಜ್ಞೆ ತಪ್ಪುವಂತೆ ಥಳಿಸಿದರು. ರಾವ್ ಒಳಗಿನಿಂದ ತಮ್ಮ ಕೇಪಿನ ಕೋವಿ ತಂದಾಗ ಅದನ್ನು ಕಿತ್ತುಕೊಳ್ಳಲು ಸೆಣಸಾಟ. ಅಷ್ಟರಲ್ಲಿ ಚೇತರಿಸಿಕೊಂಡ ಶ್ರೀಮತಿ ರಾವ್ ಅಂಗಳಕ್ಕೆ ಬಂದು ಸ್ವಲ್ಪ ದೂರದ ಮನೆಯಲ್ಲಿರುವ ಸೇರೆಗಾರ ಎಂಬವರನ್ನು ಹೆಸರು ಹಿಡಿದು ಜೋರಾಗಿ ಕರೆದಾಗ, ಆಗಂತುಕರು ಕೋವಿಯೊಂದಿಗೆ ಪರಾರಿಯಾದರು. ಆ ಗಡಿಬಿಡಿಯಲ್ಲಿ ಅಲ್ಲೇ ಬಿದ್ದು ಹೋಗಿದ್ದ ಮಾಂಗಲ್ಯ ಮರುದಿನ ಸಿಕ್ಕಿತು.

—ಇದು ಅಲ್ಲಿ ನಡೆಯಿತೆನ್ನಲಾದ ಸಿನಿಮೀಯ ಘಟನೆ.

ಇದಕ್ಕೆ ಮೊದಲು ಈ ದುಷ್ಕರ್ಮಿಗಳು ಸುಮಾರು 1 ಮೈಲಿ ದೂರದಲ್ಲಿರುವ ಸುಬ್ರಹ್ಮಣ್ಯ ಎಂಬವರ ಮನೆಯಲ್ಲಿ ಹರಕೋಡು ಮಂಜಪ್ಪಯ್ಯನವರ ಮನೆಗೆ ದಾರಿ ಕೇಳಿದರು. ಆದರೆ ಆ ಕಡೆ (ಹುಲಿಗರಡಿ ಗ್ರಾಮ) ಹೋಗದೆ ಹೆಗ್ಗಾರುಕೊಡಿಗೆಯ ದಿಕ್ಕಿನಲ್ಲಿ ಬಂದು ಈ ಮನೆಗೆ ನುಗ್ಗಿದರು.

# ನೀರು, 'ಕರೆಂಟ್' ಇಲ್ಲದೆ ತತ್ತರಿಸಿದ ಕೊಪ್ಪ

**ಕೊಪ್ಪ: ಇಲ್ಲಿ ಜೂನ್ 5ರ ಮಧ್ಯಾಹ್ನದಿಂದ ಜೂನ್ 7ರ ಮಧ್ಯಾಹ್ನದವರೆಗೆ ವಿದ್ಯುತ್ ಸರಬರಾಜು ನಿಂತು ಹೋಗಿ 2 ದಿನ (ಕೆಲವು ಪ್ರದೇಶಗಳಲ್ಲಿ 3 ದಿನ) ನೀರು ಸರಬರಾಜು ಇಲ್ಲದೆ ಇಡೀ ಊರು ಬಾಯಿ ಬಾಯಿ ಬಿಟ್ಟಿತು.**

ಬಾಳೆಹೊನ್ನೂರು–ಕೊಪ್ಪ ಮಧ್ಯೆ ಮೇಲ್ಪಾಲ್ ಮಾರ್ಗದಲ್ಲಿ ಮಳೆಗಾಳಿಗೆ ಮರ ಬಿದ್ದ ಪರಿಣಾಮ ಹೀಗಾಯಿತೆನ್ನಲಾಗಿದೆ. 6ನೇ ತಾ॥ ಒಮ್ಮೆ ಮರ ತೆಗೆದ ಮೇಲೆ ಅಂದೇ ಪುನಃ ಇನ್ನೊಂದು ಮರ ಬಿದ್ದುದರಿಂದ ಸಮಸ್ಯೆ ಮತ್ತೊಂದು ದಿನಕ್ಕೆ ಮುಂದುವರಿಯಿತು ಎನ್ನಲಾಗಿದೆ.

ಹೀಗೆ ವಿದ್ಯುತ್ ಮತ್ತು ನೀರು ಪೂರೈಕೆಗಳೆರಡೂ ವಿಫಲವಾದುದು ಈ ಊರಿನಲ್ಲಿ ಈ ಎರಡೂ ವ್ಯವಸ್ಥೆಗಳಲ್ಲಿ ಕೆಲವು ಸುಧಾರಣೆಗಳು ತುರ್ತಾಗಿ ಆಗಬೇಕಾಗಿರುವುದನ್ನು ಮತ್ತೊಮ್ಮೆ ಎತ್ತಿ ತೋರಿಸಿದೆ.

### 1. ವಿದ್ಯುತ್

ಹಿಂದೆ ಈ ಊರಿಗೆ ಬಾಳೆಹೊನ್ನೂರು ಮತ್ತು ತೀರ್ಥಹಳ್ಳಿ–ಹೀಗೆ 2 ಕಡೆಗಳಿಂದ ವಿದ್ಯುತ್ ಸರಬರಾಜು ಇತ್ತು. ಆದರೆ ಕಳೆದ ವರ್ಷ ಇಲ್ಲಿಯೇ ಸ್ವಿಚಿಂಗ್ ಸಬ್ ಸ್ಟೇಷನ್ ಆದ ನಂತರ ತೀರ್ಥಹಳ್ಳಿ ಲೈನನ್ನು ನಿಲ್ಲಿಸಿ, ಬಾಳೆಹೊನ್ನೂರಿನಿಂದ ಮೇಲ್ಪಾಲ್ ಮೂಲಕ ನೇರ ಲೈನ್‌ನಲ್ಲಿ ವಿದ್ಯುತ್ ಪೂರೈಕೆಯಾಗುತ್ತಿದೆ.

ಹೀಗಾಗಿ, ಹಿಂದೆ ಒಂದು ಲೈನ್ ವಿಫಲವಾದರೆ ಇನ್ನೊಂದು ಲೈನಿನಿಂದಲಾದರೂ ವಿದ್ಯುತ್ ಪಡೆಯುತ್ತಿದ್ದ ಸೌಕರ್ಯ ಈಗ ತಪ್ಪಿ ಹೋಗಿದೆ.

ಈಗ ಕೊಪ್ಪಕ್ಕೆ ಒಂದೇ ಒಂದು ಮಾರ್ಗದಿಂದ ವಿದ್ಯುತ್ ಸರಬರಾಜಾಗುತ್ತಿದ್ದು, ತುರ್ತಿನ ಸಂದರ್ಭಗಳಲ್ಲಿ ಯಾವುದೇ ರೀತಿ ಪರ್ಯಾಯ ವ್ಯವಸ್ಥೆ ಸಹ ಮಾಡಿಕೊಳ್ಳುವುದು ಸಾಧ್ಯವಿಲ್ಲದಾಗಿದೆ. ಮಳೆಗಾಲದ ಆರಂಭ ದಿನಗಳಲ್ಲಿ ಮರಗಳು ಉರುಳಿ ಲೈನ್ ತುಂಡಾಗುವುದು ಅತೀ ಸಾಮಾನ್ಯದ ವಿಷಯುವಾಗಿರುವುದರಿಂದ, ಈ ಪರಿಸ್ಥಿತಿಯನ್ನು ತಪ್ಪಿಸಿ, ತುರ್ತು ಸಂದರ್ಭಗಳಲ್ಲಿ ಸುಲಭದಲ್ಲಿ ಪರ್ಯಾಯ ವ್ಯವಸ್ಥೆ ಕಲ್ಪಿಸಿಕೊಳ್ಳಲು ಅವಕಾಶವನ್ನು ಇಲಾಖೆ ಒದಗಿಸಿಕೊಡ ಬೇಕಾಗಿದೆ.

### 2. ನೀರು.

ತೆರೆದ ಬಾವಿಗಳಾಗಲಿ ಕೊಳವೆ ಬಾವಿಗಳಾಗಲಿ ಅತೀ ಅಪರೂಪವಾಗಿರುವ ಈ ಊರಿನಲ್ಲಿ ನೀರು ಸರಬರಾಜು ವ್ಯವಸ್ಥೆ ಸಂಪೂರ್ಣವಾಗಿ ವಿದ್ಯುತ್ತನ್ನು ಅವಲಂಬಿಸಿದೆ. ಹರಿಹರಪುರ ಹೊಳೆಯಿಂದಲೂ ಹಿರೀಕೆರೆಯಿಂದಲೂ ಇಡೀ ದಿನ ನೀರೆತ್ತಿದರೆ ಮಾತ್ರ ಊರಿನ ಎಲ್ಲ ಪ್ರದೇಶಗಳಿಗೂ ತಕ್ಕಮಟ್ಟಿಗೆ ನೀರು ಪೂರೈಸಲು ಸಾಧ್ಯವಾಗುತ್ತದೆ.

ಆದರೆ ಮೇಲೆ ಹೇಳಿದಂತೆ ಇಲ್ಲಿನ ವಿದ್ಯುತ್ ಪೂರೈಕೆ ಪರಿಸ್ಥಿತಿ ಬಹಳ ನಾಜೂಕಾಗಿದೆ. ಲೋಕನಾಥಪುರದಲ್ಲಿ ಸಂಪರ್ಕ ತಪ್ಪಿಸಿರುವುದೂ ನೀರು ಪೂರೈಕೆಗೆ ಸ್ವಲ್ಪ ಪೆಟ್ಟು ಕೊಟ್ಟಿದೆಯೆನ್ನಲಾಗಿದೆ. ಒಮ್ಮೆ ಹೋದ ಕರೆಂಟ್ ಪುನಃ ಬಂದನಂತರವೂ ನೀರು ಪೂರೈಕೆ ಆರಂಭಿಸಲು ಮತ್ತೂ ಆರೆಂಟು ಗಂಟೆ ಬೇಕಾಗುತ್ತದೆ. ಕೆರೆಯ ನೀರಾದರೆ 2–3 ಗಂಟೆ ಬೇಕಾಗುತ್ತದೆ.

ಪುರಸಭಾ ಮುಖ್ಯಾಧಿಕಾರಿಗಳು ಹೇಳುವಂತೆ, 50 ಸಾವಿರ ಗ್ಯಾಲನ್ ನೀರು ಸಂಗ್ರಹದ ಇನ್ನೊಂದು ತೊಟ್ಟಿಯ (ಗ್ರೌಂಡ್ ಲೆವೆಲ್ ರಿಸರ್ವಾಯರ್–ಜಿ.ಎಲ್. ಆರ್.) ನಿರ್ಮಾಣ ಮತ್ತು ಹರಿಹರಪುರ ಹೊಳೆಯ ಪಂಪ್‌ಹೌಸ್‌ನಲ್ಲಿ 60 ಅಶ್ವಶಕ್ತಿಯ ಮೋಟರ್ ಜೋಡಣೆ ಮುಗಿದರೆ, ದಿನದ 24 ಗಂಟೆಯೂ ನೀರು ಶೇಖರಣೆಯಾಗಿ, ನೀರಿನ ಸಂಗ್ರಹವೂ ಹೆಚ್ಚಿಗೆ ಇರುವುದರಿಂದ ಇಂಥ ಸಂದರ್ಭಗಳಲ್ಲಿ ನೀರು ಪೂರೈಕೆ ಇಷ್ಟೊಂದು ಕುಸಿಯುವುದಿಲ್ಲ.

ಆದರೆ ವಾಸ್ತವವಾಗಿ ಆಗಲೂ ವಿದ್ಯುಚ್ಛಕ್ತಿಯನ್ನೇ ಪೂರ್ತಿ ಅವಲಂಬಿಸಿಕೊಂಡಿರುವುದಲ್ಲದೆ 2 ಅಥವಾ 3 ದಿನದ ವಿದ್ಯುತ್ ವೈಫಲ್ಯ ನಿಭಾಯಿಸುವಷ್ಟೇನೂ ಇರುವುದಿಲ್ಲ. ಹರಿಹರಪುರದಿಂದ ಯೂ ಹಿರೀಕೆರೆಯ ನೀರಿನ [illegible] ಹೆಚ್ಚು ವೇಳೆ ತೆಗೆದುಕೊಳ್ಳುತ್ತದೆ.

(ನಾಲ್ಕನೇ ಪುಟಕ್ಕೆ)

# ಜನಾರೋಗ್ಯ ಸೇವೆ — ಸಾಮಾಜಿಕರ ಪಾತ್ರ

"2000ನೇ ಇಸವಿಯ ಒಳಗಾಗಿ ಸರ್ವರಿಗೂ ಆರೋಗ್ಯ" ಎಂಬ ಘೋಷಣೆಯನ್ನು ವಿಶ್ವಸಂಸ್ಥೆ ಹೊರಡಿಸಿದೆ.ಅಂದರೆ 2000ನೇ ಇಸವಿಯಿಂದ ಆಚೆಗೆ ಯಾರೂ ಶೀತ, ಜ್ವರದಿಂದ ಸಹ ನರಳಲಿಕ್ಕೇ ಕೂಡದು, ನರಳುವುದಿಲ್ಲ ಎಂಬರ್ಥವಲ್ಲ! ಜನರ ಆರೋಗ್ಯ ಪ್ರಜ್ಞೆ ಹೆಚ್ಚಿ, ಭಯಂಕರ ರೋಗಗಳೆನಿಸಿದ ಕ್ಷಯ, ಕುಷ್ಠ, ಸಾಂಕ್ರಾಮಿಕ ರೋಗಗಳು, ಮಕ್ಕಳಿಗೆ ಬರುವಂಥ ಅಂಧತ್ವ, ಪೌಷ್ಟಿಕಾಂಶಗಳ ಕೊರತೆ, ಮಾನಸಿಕ ಕಾಯಿಲೆಗಳು, ಇತ್ಯಾದಿ ಕಾಯಿಲೆಗಳಿಂದ ವಿಮುಕ್ತರಾಗಿಸುವುದು ಮತ್ತು ಆರೋಗ್ಯಯುತ, ಸಮಾಜೋಪಯೋಗಿ ಸಾಮಾಜಿಕರನ್ನು ಒಳಗೊಂಡ ಸಮಾಜದ ಸುಂದರ ಕನಸನ್ನು ನನಸು ಮಾಡುವುದೇ ಈ ಗುರಿ.

ಜನರ ಆರೋಗ್ಯದ ರಕ್ಷಣೆ ಮತ್ತು ಆರೋಗ್ಯದ ಬಗ್ಗೆ ತಿಳುವಳಿಕೆ ಮೂಡಿಸುವಿಕೆ ಬರೀ ಆರೋಗ್ಯ ಇಲಾಖೆಯ ಕಾರ್ಯವಾಗದೇ ಸಾಮಾಜಿಕರಲ್ಲಿ ಆರೋಗ್ಯ ಪ್ರಜ್ಞೆ ಬೆಳೆಯಬೇಕು. ಬರೀ ಸರ್ಕಾರವನ್ನೇ ನೆಚ್ಚಿಕೊಂಡರೆ ಸಾಲದು–ವಿವಿಧ ಸಂಘ ಸಂಸ್ಥೆಗಳು, ಹಲವು ಇಲಾಖೆಗಳು ಸೇರಿ ವಿಚಾರ ವಿನಿಮಯ ಮಾಡಿ, ಸಾಮೂಹಿಕವಾಗಿ ತೊಡಗಬೇಕಾದ ಕಾರ್ಯವಿದು.

ಒಂದು ಉದಾಹರಣೆಯನ್ನು ತೆಗೆದು ಕೊಳ್ಳುವಾ. ನಮ್ಮೀ ಮಲೆನಾಡಿನ ಹಳ್ಳಿಗಳಲ್ಲಿ ರಕ್ತಹೀನತೆಯಿಂದ ಬಳಲುತ್ತಿರುವವರು ಹಲವು ಮಂದಿ. ಆ ರಕ್ತ ಹೀನತೆ ಬಹುತೇಕವಾಗಿ ಕೊಕ್ಕೆ ಹುಳದಿಂದ ಆದದ್ದು. ಕೊಕ್ಕೆ ಹುಳುವಿನ ಈ ಉಪದ್ರದಿಂದ ಪಾರಾಗುವುದು ಹೇಗೆ? ನಮ್ಮ ಹಳ್ಳಿಯ ಜನರು ಬಯಲಿನಲ್ಲಿ, ಗದ್ದೆ ಅಂಚಿನಲ್ಲಿ, ಹಳ್ಳದ ಬಳಿ, ಮಲ ವಿಸರ್ಜನೆ ಮಾಡುತ್ತಾರೆ. ಆ ಮಲದಲ್ಲಿ ಕೊಕ್ಕೆ ಹುಳುವಿನ ಮೊಟ್ಟೆಯನ್ನು ವಿಸರ್ಜಿಸುತ್ತಾರೆ. ಕಾಲ ಕ್ರಮದಲ್ಲಿ ಮೊಟ್ಟೆಯಿಂದ ಮರಿಹುಳಗಳು ಆಗುತ್ತವೆ. ಮನುಷ್ಯ ಬರಿಗಾಲಿನಿಂದ ಅದನ್ನು ಮೆಟ್ಟಿದಲ್ಲಿ ಅವು ಅವನ ಕಾಲ ಬುಡದಿಂದ ಪ್ರವೇಶಿಸಿ ಕರುಳಿನ ಮೊದಲ ಭಾಗದಲ್ಲಿ ಕಚ್ಚಿ ಹಿಡಿದು ರಕ್ತ ಹೀರಲಾರಂಭಿಸುತ್ತದೆ. (ಒಂದು ಹುಳ ಒಂದು ದಿನದಲ್ಲಿ ಒಂದು ಹನಿ ರಕ್ತವನ್ನು ಹೀರುತ್ತದೆ!)

ಎಲ್ಲರೂ ಪಾದರಕ್ಷೆ ಧರಿಸಿ ಓಡಾಡುವುದು, ಹಾಗೂ ಕಕ್ಕಸುಗಳ ನಿರ್ಮಾಣ ಇವುಗಳಿಂದ ಈ ಕೊಕ್ಕೆ ಹುಳುವಿನ ಬಾಧೆಯನ್ನು ಸಂಪೂರ್ಣವಾಗಿ ತಡೆಗಟ್ಟಬಹುದು. ಇವುಗಳಲ್ಲಿ ಬಹಳ ಮುಖ್ಯವಾದ ಕಕ್ಕಸುಗಳ ನಿರ್ಮಾಣದ ಬಗ್ಗೆ ಸಾಮಾಜಿಕರಲ್ಲಿ ತಿಳುವಳಿಕೆ ಮೂಡಿಸಿ, ಆರ್ಥಿಕವಾಗಿ ಅನುಕೂಲತೆಯಿಲ್ಲದವರಿಗೆ ವಿವಿಧ ಸಂಘ ಸಂಸ್ಥೆಗಳ ಮೂಲಕ ನೆರವು ಪಡೆದು, ಗ್ರಾಮದ ಉತ್ಸಾಹೀ ಯುವ ಶಕ್ತಿಯನ್ನು ಕಾಲುವೀಕರಿಸಿ ಸಾಧಿಸಬಹುದು. ಸಮುದಾಯದ ಆರೋಗ್ಯ ರಕ್ಷಣೆಯಲ್ಲಿ ಸಾಮಾಜಿಕರು ಹೇಗೆ ಸಾಮೂಹಿಕವಾಗಿ ಕೈ ಕೂಡಿಸಬಹುದೆಂಬ ಬಗ್ಗೆ ಇದೊಂದು ಉದಾಹರಣೆ ಮಾತ್ರ.

ಇಂಥದೊಂದು ಪ್ರಯತ್ನ ಉತ್ತಮೇಶ್ವರದಲ್ಲಿ ಪ್ರಾರಂಭವಾಗಿದೆ. ಕನಸು ನನಸಾಗುವ ಶುಭ ಸೂಚನೆಗಳು ಕಂಡು ಬರುತ್ತಿವೆ. ಹೊನ್ನಾವರದ 'ಸ್ನೇಹಕುಂಜ'ದ ಕುಸುಮಕ್ಕ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದಾರೆ. ಕುಮಟಾದ ಸರ್ವೋದಯ ಕಾರ್ಯಕರ್ತ ಶ್ರೀ ಎಸ್. ಎಸ್. ಹೆಗ್ಡೆ ಅತೀ ಕಡಿಮೆ ಖರ್ಚಿನಲ್ಲಿ ಕಕ್ಕಸು ಪೀಠ (ಬೇಸಿನ್) ಒದಗಿಸಲಿದ್ದಾರೆ. ಕಕ್ಕಸು ಗುಂಡಿಗಳನ್ನು ಶ್ರಮದಾನದ ಮೂಲಕ ತೋಡುವ ಯೋಜನೆ ಇದೆ. ಸುತ್ತ ತಡಿಕೆ, ಮೇಲೆ ನೀರು ಬೀಳದ ಹಾಗೆ ಮಾಡಲು ಇವನ್ನು ಅತ್ಯಂತ ಕಡಿಮೆ ಖರ್ಚಿನಲ್ಲಿ ನಿರ್ಮಿಸಬೇಕಾಗುತ್ತದೆ.

ಇಂಥ ಸಾಮೂಹಿಕ ಪ್ರಯತ್ನಗಳ ಯಶಸ್ಸಿಗೆ ಮುಖ್ಯವಾಗಿ ಬೇಕಾದ ಬಂಡವಾಳವೆಂದರೆ ಜನಶಕ್ತಿ. ನಮ್ಮ ಸುತ್ತಲಿನ ಸಮಾಜದ ಋಣವನ್ನು ನಮ್ಮ ಒದುಕಿನ ಅಲ್ಪ ಕಾಲದಲ್ಲಿ ಕಿಂಚಿತ್ತಾದರೂ ತೀರಿಸಬೇಕೆಂಬ ಪ್ರಜ್ಞೆ ಜನತೆಯಲ್ಲಿ ಬೆಳೆಯಬೇಕು. ನಾವೆಲ್ಲ ವಾರಕ್ಕೆ ಒಂದು ಗಂಟೆ ನಮ್ಮ ಸಮಾಜದ ಬಗ್ಗೆ ಸಕ್ರಿಯವಾಗಿ ಯೋಚಿಸಿದ್ದೇ ಆದಲ್ಲಿ ಆದಕ್ಕಿಂತ ದೊಡ್ಡ ಬಂಡವಾಳ ಮತ್ತೇನು ಬೇಕು?

ಹೀಗೆಯೇ ಹತ್ತು ಹಲವು ಕಾಯಿಲೆಗಳ ನಿವಾರಣೆಯ ಬಗ್ಗೆ ಸಾಮಾಜಿಕರು ಕಾರ್ಯಕ್ರಮ ಹಮ್ಮಿಕೊಳ್ಳಬಹುದು. ಗಾಂಧೀಜಿಯವರ "ಗ್ರಾಮ ಉದ್ಧಾರ–ದೇಶದ ಉದ್ಧಾರ"ದ ಕನಸು ಈ ರೀತಿ ನನಸಾಗಲು ಸಾಧ್ಯ. ಸಂಪನ್ಮೂಲದ ಕೊರತೆ–ಅಪಾರ ಜನ ಸಾಂದ್ರತೆಯ ಎದುರು ಇಂಥ ಸಾಮೂಹಿಕ ಪ್ರಯತ್ನವೊಂದೇ ನಮಗುಳಿದಿರುವ ಮಾರ್ಗ ಎಂಬುದೂ ನಿಜ.

ಆದ್ದರಿಂದ ಬನ್ನಿ ಬಾಂಧವರೆ, ಸಮಾಜದ ರಥವನ್ನು ಎಳೆಯಲು ನಾವೆಲ್ಲ ಕೈಗೂಡಿಸೋಣ.

—ಡಾ|| ಎಸ್.ಆರ್.
ಕೋದಂಡರಾಮ್
ಆರೋಗ್ಯಾಧಿಕಾರಿಗಳು,
ಉತ್ತಮೇಶ್ವರ

## ಕಾಣೆಯಾದ ಕೋಳಿ

ಹಗಲಿಗೂ ಮುಂಚೆ
ಬೆಳಕಿನುಸಿರನು ಪಡೆದು
ಬಗೆದು ಜಡಮುಗಿಲಿನೊಡಲ
ಹಾಡಾಗಿ ರೇಶಿಮೆಯ ಚೆಂಡಾಗಿ
ಬೀದಿ ತುಂಬೆಲ್ಲ
ಗಂಡಸು ತನದ ಮಸ್ತಿಯಲಿ ಮೆರೆದ
ಹಜಾರದ ಮನೆ ಕೋಳಿ
ನೋಡುವವರ ಕಣ್ಣೊಳಗಿಳಿದು
ಚಿಮ್ಮುತ್ತಿತ್ತು ಚಿಗುರಿನ ಹೋಳಿ.

ಹಗಲಲ್ಲೂ ಕಟ್ಟಿದರು
ಇದರ ಸೊಬಗಿಗೆ ಸೋತ ಜನ
ಅರೆ ಎಚ್ಚರದ ಪರಿಯಲ್ಲಿ
ತೆರೆದ ಆಸೆಯಂಕಣದ ಕನಸು:
ಮಳೆ ಬಿಸಿಲು ಬೆದೆ
ಹವಳ ಗುಟುಕಿಸಿದ
ನವಿಲಿನ ಹಾಗೆ ಬಣ್ಣದ ಕಣ್ಣುಗಳ
ಗರಿಮೂಡಿ ನಲಿಯುವುದೆ
ಈ ಕೋಳಿ ಒಂದು ದಿನ!
ಮಸ್ತಿ ಮಸ್ತಿಯು ಕರಗಿ
ಕಾಲಾದ ಕೊಕ್ಕಾದ ಗರಿಯಾದ
ಈ ಕೋಳಿ ಬಲಮೂಡಿ
ಕಾದುವುದೆ ಒಂದು ದಿನ!

ಕನಸು ಬಿಟ್ಟೆಚ್ಚರದ ವಾಸ್ತವದಿ
ಕಾಣೆಯಾಗಿತ್ತು ಕಹಳೆ ಕತ್ತಿನ ಕೋಳಿ
ಬೆಳ್ಳಿ ತಟ್ಟೆಯ ಉಳ್ಳವರ
ಹೊಟ್ಟೆಯೊಳಡಗಿತ್ತು ಅದರ ಸದ್ದು ಸವೆದು
ಈಲಿ ಗುಂಡಿಗೆಯಾಗಿ
ನಲ್ಲಿ ಮೂಳೆಯ ರಸವಾದ
ಕೋಳಿಯ ಪುಕ್ಕ, ಕಾಲಿನ ಪೊರೆ
ಕೊಕ್ಕಿನ ಉಕ್ಕು
ಆಗೀಗ ಬೀಸುವ ಗಾಳಿಯಲ್ಲೆಲ್ಲಾ ತೂರಿತು.
ಕಂಗಾಲಾದ ಕಂಗಳಿಗೆ
ತ್ರಿವರ್ಣ ಧ್ವಜವಾಗಿ ತೋರಿ
ದೇಶ ಭಕ್ತಿಯ ನುಡಿಸಿತು.

ಜೀರ್ಣವಾಗದ ಹುಂಜ ಮಚ್ಚರ
ಉಂಡ ಭಂಡರ ಹೊಟ್ಟೆಯೊಡೆಯಿತು
ಕಾಲಿನಡಿಯಲಿ ಮೋಡದೊಡಲಲಿ
ಸಾವಕೋಳಿಯ ಕೆಂಪು ಕುಡಿಯಲಿ
ಸತ್ತ ಹಕ್ಕಿಯ ಕೂಗು ಕರಗಿತು
ಗಾಳಿಯಾಯಿತು ಗೂಳಿ ಚೇತನ
ಆಲ ಮೂಲವ ಅಲುಗಿಸಿ.

—ಬಿ. ಗಂಗಾಧರ ಮೂರ್ತಿ.
ಗೌರಿಬಿದನೂರು.

# ಹರೂರು ಗ್ರಾಮದಲ್ಲಿ ಜನ ಸಂಪರ್ಕ ಸಭೆ

ನೆಮ್ಮಾರು: ಇಲ್ಲಿಗೆ ಸಮೀಪದ ಹರೂರಿನಲ್ಲಿ ಮೇ 19ರಂದು ಜಿಲ್ಲಾಧಿಕಾರಿಗಳು ಜನ ಸಂಪರ್ಕ ಸಭೆ ನಡೆಸಿದರು. ಸ್ಥಳೀಯ ಸಮಸ್ಯೆಗಳಿಗೆ ಸಂಬಂಧಿತ ಅಧಿಕಾರಿಗಳು ಉತ್ತರಿಸಿದರು. ಸಚಿವ ಗೋವಿಂದಗೌಡರೂ ಸಭೆಯಲ್ಲಿ ಭಾಗವಹಿಸಿದ್ದರು.

ಪಶು ಸಂಗೋಪನಾ ಸಂಚಾರಿ ಚಿಕಿತ್ಸಾ ಘಟಕ ಹರೂರಿಗೂ ಬರುವಂತೆ ಏರ್ಪಡಿಸುವುದು; ಹರೂರು ಶಾಲೆಯಲ್ಲಿ 7 ತರಗತಿಗಳಿಗೆ ಕೇವಲ ಇಬ್ಬರು ಉಪಾಧ್ಯಾಯರಿದ್ದು ಕನಿಷ್ಠ ಇನ್ನೊಬ್ಬರನ್ನಾದರೂ ನೇಮಿಸುವುದು; ನೆಮ್ಮಾರು ಆಸ್ಪತ್ರೆಗೆ ವೈದ್ಯರ ನೇಮಕ ಹಾಗೂ ನೆಮ್ಮಾರು ಮತ್ತು ಹರೂರು ಕೇಂದ್ರಗಳಲ್ಲಿ ಒಂದು ವರ್ಷದಿಂದಲೂ ಆರೋಗ್ಯ ಕಾರ್ಯಕರ್ತೆಯರು ಇಲ್ಲದಿದ್ದು ಅವರ ನೇಮಕ; ತೆಕ್ಕೂರು–ಮಲೆನಾಡು ರಸ್ತೆ ನಿರ್ಮಾಣ ಮುಂತಾದ ಬೇಡಿಕೆಗಳನ್ನು ಮಂಡಿಸಲಾಯಿತು.

ಒಂದೇ ಕಡೆ ಇರುವ 10 ಮನೆಗಳಲ್ಲಿ 9ಕ್ಕೆ ವಿದ್ಯುತ್ ಸರಬರಾಜು ಆಗಿದ್ದು, ಉಳಿದ ಒಂದು ಮನೆಗೆ ವಿದ್ಯುಚ್ಛಕ್ತಿ ಸರಬರಾಜಿಗೆ 500 ರೂ. ಲಂಚ ಕೇಳಿದ್ದನ್ನು; ಕೃಷಿ ಇಲಾಖೆಯ ಕಾರ್ಯದಲ್ಲಿ ನಿರಾಸಕ್ತಿ, ಗ್ರಾಮ ಸಹಾಯಕರು ಭೇಟಿ ಕೊಡದಿರುವುದು ಮುಂತಾದ ಕೆಲವು ಆಕ್ಷೇಪಣೆಗಳನ್ನು ಸಚಿವರ ಗಮನಕ್ಕೆ ತಂದು ಸಮಸ್ಯೆ ಬಗೆಹರಿಸುವ ಆಶ್ವಾಸನೆ ಕೊಡಲಾಯಿತು. ಜುಲೈ ಮೊದಲ ವಾರದಲ್ಲಿ ಸಾಗುವಳಿ ಯೋಗ್ಯ ಜಮೀನಿನ ಪಟ್ಟಿಯನ್ನು ಪ್ರಕಟಿಸಿ, ಯೋಗ್ಯ ಜಮೀನನ್ನು ದರಖಾಸ್ತು ಕೊಡುವುದಾಗಿ ತಿಳಿಸಲಾಯಿತು.

ಸಮೀಪದಲ್ಲಿ 1500 ಅಡಿಗಳಿಗೂ ಹೆಚ್ಚು ಎತ್ತರದಿಂದ ಒಂದು ಹಳ್ಳ ಬರುತ್ತಿದ್ದು, ಅದಕ್ಕೆ ಸಣ್ಣ ಪ್ರಮಾಣದ ವಿದ್ಯುಚ್ಛಕ್ತಿ ಉತ್ಪಾದನೆಯ ಘಟಕವೊಂದನ್ನು ನಿರ್ಮಿಸಿದರೆ ಸುತ್ತ ಮುತ್ತಲ ಊರುಗಳಿಗೆಲ್ಲ ವಿದ್ಯುತ್ ಸರಬರಾಜು ಸಾಧ್ಯವಿದೆಯೆಂಬ ಕಲ್ಕುಳಿ ಮಲ್ಲಪ್ಪ ಹೆಗ್ಡೆಯವರ ಸಲಹೆಯನ್ನು ಪರಿಶೀಲಿಸುವ ಭರವಸೆ ನೀಡಲಾಯಿತು.

ಈ ಸಂಧರ್ಭದಲ್ಲಿ ಜಿಲ್ಲಾಧಿಕಾರಿಗಳು ಮಾತನಾಡಿ 86–87ನೇ ಸಾಲಿಗೆ ಶೃಂಗೇರಿ ತಾಲ್ಲೂಕಿಗೆ 74 ಲಕ್ಷದ 31 ಸಾವಿರ ರೂ.ಗಳ ಯೋಜನಾ ವೆಚ್ಚದ ಅಂದಾಜು ಪಟ್ಟಿಯನ್ನು ತಯಾರಿಸಿದ್ದು, ಪ್ರತೀ ಮಂಡಲಕ್ಕೂ ತಲಾ 16–17 ಲಕ್ಷ ರೂ.ಗಳು ಅಭಿವೃದ್ಧಿಗಾಗಿ ಲಭಿಸುವುದು. ಅದಕ್ಕೆ ಸ್ಥಳೀಯ ಸಮಪಾಲು ಆದಾಯ ಸೇರಿ 1.5 ಕೋಟಿ ರೂ.ಗಳು ಈ ಒಂದು ತಾಲ್ಲೂಕಿಗೆ ಸಿಗುವುದೆಂದು ತಿಳಿಸಿದರು. ಅಂತೆಯೇ ಜಿಲ್ಲೆಯ 107 ಮಂಡಲಗಳಿಗೆ 8 ಕೋಟಿ 13 ಲಕ್ಷ ರೂ.ಗಳ ಯೋಜನಾ ವೆಚ್ಚದ ಅಂದಾಜು ಪಟ್ಟಿ ಜಿಲ್ಲಾಭಿವೃದ್ಧಿ ಸಮಿತಿಯಿಂದ ಶಿಫಾರಸ್ಸು ಆಗಿ ಸರ್ಕಾರಕ್ಕೆ ಹೋಗಿದೆ ಎಂದು ತಿಳಿಸಿದರು.

**ಸಮಗ್ರ ಗ್ರಾಮೀಣ ಅಭಿವೃದ್ಧಿ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಬರುವ ವರ್ಷ 144 ಗ್ರಾಮಗಳಿಂದ 152 ಗ್ರಾಮಗಳಿಗೆ ವಿಸ್ತರಿಸಲಿದ್ದು ಪ್ರತಿ ಗ್ರಾಮಕ್ಕೂ ಒಬ್ಬ ಅಧಿಕಾರಿಯನ್ನು ಉಸ್ತುವಾರಿಗಾಗಿ ನೇಮಿಸಿ ಅದು ಅಭಿವೃದ್ಧಿಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿ ಕೊಡಲಾಗುವುದು; ಇಂಥ ಯೋಜನೆಯ ಪ್ರಗತಿಯ ಬಗ್ಗೆ ತಾಲ್ಲೂಕು ಮಟ್ಟದ ಸಭೆ ನಡೆಸಲಾಗುವುದು ಎಂದು ತಿಳಿಸಿ, ಇದು ಯಶಸ್ವಿಯಾದರೆ ಹಳ್ಳಿಗರು ಪಟ್ಟಣಕ್ಕೆ ವಲಸೆ ಹೋಗುವುದನ್ನು ಬಿಟ್ಟು ಹಳ್ಳಿಯಲ್ಲಿಯೇ ತಮ್ಮ ಹೆಚ್ಚಿನ ಆದಾಯದಿಂದ ಬದುಕಲು ಸಹಕಾರಿಯಾಗುವುದು ಎಂದು ತಿಳಿಸಿದರು.

ಸಭೆಯಲ್ಲಿ ಸ್ವೀಕರಿಸಲಾದ ಸುಮಾರು 30 ಅರ್ಜಿಗಳಲ್ಲಿ ಕೆಲವಕ್ಕೆ ಸ್ಥಳದಲ್ಲೇ ಪರಿಹಾರ ಕಲ್ಪಿಸಿ, ಉಳಿದುವನ್ನು ಸೂಕ್ತ ಕ್ರಮಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ನೀಡಲಾಯಿತು.

## ಓದುಗರ ಪತ್ರ

### ರಂಗೋಲಿ ಕಲೆ ಬಗ್ಗೆ ಸಂಶೋಧನೆಗೆ ಸಹಕರಿಸಿ

ಮಾನ್ಯರೆ,

ಭಾರತದ ಒಬ್ಬ ಹೆಸರಾಂತ ಕಲಾವಿದರೂ ಲಲಿತಕಲಾ ಅಕಾಡೆಮಿ ಸದಸ್ಯರೂ ಹಾಗೂ ಪ್ರಶಸ್ತಿ ವಿಜೇತರೂ ಆದ ಬಿ. ಪಿ. ಬಾಯಿರಿಯವರು ರಂಗವಲ್ಲಿ ಕಲೆಯ ಬಗ್ಗೆ ಸಂಶೋಧನೆ ನಡೆಸುತ್ತಿದ್ದು ಅದರಲ್ಲಿ ನಾನೂ ಸಹಕರಿಸುತ್ತಿರುವುದರಿಂದ, ರಂಗವಲ್ಲಿ ಚಿತ್ರಕಲೆಯ ಬಗ್ಗೆ ಪರಂಪರಾಗತವಾದ ಹಾಡುಗಳು ಕತೆಗಳು ಇತ್ಯಾದಿ ಇದ್ದಲ್ಲಿ ಈ ಕೆಳಕಂಡ ವಿಳಾಸಕ್ಕೆ ಕಳಿಸಬೇಕಾಗಿ ಓದುಗರಲ್ಲಿ ವಿನಂತಿ.

—ಎಂ. ವಿ. ಗಂಗಾಧರ್,
ಗುಡ್ಡೇತೋಟ, ಕೊಪ್ಪ ತಾ॥

'ಸೇವಾನಿರತ ಶಿಕ್ಷಕರ ತರಬೇತಿ ಶಿಬಿರ'ದಲ್ಲಿ 'ಮುಂಜಾವು' ಸಂಪಾದಕರ ಕರೆ:

## "ಮಕ್ಕಳಲ್ಲಿ ವಿಶಾಲ ಮನೋಭಾವನೆಯ ತಳಹದಿ ಹಾಕಿ"

ರಾಷ್ಟ್ರೀಯ ಹೊಸ ಶಿಕ್ಷಣ ನೀತಿಯ ಬಗ್ಗೆ ಸೇವಾನಿರತ ಶಿಕ್ಷಕರ ಬೃಹತ್ ತರಬೇತಿ ಕಾರ್ಯಕ್ರಮವೊಂದು ಕೊಪ್ಪದಲ್ಲಿ ನಡೆಯುತ್ತಿದೆ.

ಕೊಪ್ಪ, ಶೃಂಗೇರಿ, ನ. ರಾ ಪುರ ತಾ॥ಗಳ ಆಯ್ದ 200 ಜನ ಮುಖ್ಯೋಪಾಧ್ಯಾಯರು ಮತ್ತು ಇತರ ಅಧ್ಯಾಪಕರಿಗೆ ತಲಾ 10 ದಿನ ಈ ತರಬೇತಿ ನಡೆಯುತ್ತದೆ.

ಆಯಾ ರಾಜ್ಯ ಮತ್ತು ಪ್ರಾದೇಶಿಕ ವಿಶಿಷ್ಟತೆಗಳಿಗೆ ಹೊಂದುವಂತೆ ಪಾಠಗಳನ್ನು ಅಳವಡಿಸಿಯೂ ಒಟ್ಟಾರೆಯಲ್ಲಿ ರಾಷ್ಟ್ರ ಮಟ್ಟದಲ್ಲಿ ಏಕರೂಪದ ಶಿಕ್ಷಣ ಕ್ರಮ ರೂಪಿಸುವ ದಿಕ್ಕಿನಲ್ಲಿ ಕೇಂದ್ರ ಸರ್ಕಾರದ ಶಿಕ್ಷಣ ಇಲಾಖೆ ಒಂದು ಕರಡು ಮಾದರಿಯನ್ನು ರೂಪಿಸಿದ್ದು, ಇದರ ಬಗ್ಗೆ ಪೂರ್ವಭಾವಿಯಾಗಿ ತರಬೇತಿ ನೀಡಲ್ಪಟ್ಟಿರುವ ಹೆಚ್. ಎಂ. ಮಲ್ಲಯ್ಯ, ಡಾ॥ ಎಸ್. ವಿ. ಎಂ., ಬಿ. ವಿ. ಶಿವಮೂರ್ತಿ ಮತ್ತು ದತ್ತಾತ್ರಿ ಇವರುಗಳು ಈ ಶಿಬಿರದ ನಿರ್ದೇಶಕರಾಗಿದ್ದಾರೆ.

ಈಗಾಗಲೇ ಒಂದು ತಂಡದ ತರಬೇತಿ ಮುಗಿದಿದ್ದು, ಜೂನ್ 6 ರಿಂದ ಎರಡನೇ ತಂಡದ ತರಬೇತಿ ಆರಂಭವಾಗಿದೆ. ಶಿಬಿರಾರ್ಥಿಗಳು ಈ ಕರಡು ಶಿಕ್ಷಣ ನೀತಿಯನ್ನು ಸಮಗ್ರವಾಗಿ ಚರ್ಚಿಸಿ, ತಮ್ಮ ವ್ಯಾಪಕ ಅನುಭವದ ಆಧಾರದ ಮೇಲೆ ವಾಸ್ತವಿಕತೆಯ ನೆಲೆಗಟ್ಟಿನಲ್ಲಿ ಹಲವು ಸಲಹೆಗಳನ್ನು ಮುಂದಿಡುತ್ತಾರೆ. ಇವುಗಳನ್ನು ಮೊದಲು ರಾಜ್ಯ ಮಟ್ಟದಲ್ಲಿ, ಅನಂತರ ರಾಷ್ಟ್ರ ಮಟ್ಟದಲ್ಲಿ ಕ್ರೋಢೀಕರಿಸಿ, ಕೊನೆಯಲ್ಲಿ ಶಿಕ್ಷಣ ನೀತಿಗೆ ಅಂತಿಮ ರೂಪ ಕೊಡಲಾಗುತ್ತದೆ.

ಶಿಬಿರಾರ್ಥಿಗಳು ಬಹಳ ಉತ್ಸಾಹದಿಂದಲೂ ಪ್ರಜ್ಞಾಪೂರ್ವಕವಾಗಿಯೂ ಶಿಬಿರದಲ್ಲಿ ಭಾಗವಹಿಸುತ್ತಿರುವುದಾಗಿ ಶಿಬಿರಾಧಿಕಾರಿ ಹೆಚ್. ಎಂ. ಮಲ್ಲಯ್ಯ ತಿಳಿಸಿದ್ದಾರೆ.

**"ವಿಶಾಲ ಮನೋಭಾವ ರೂಪಿಸಿ"**

ಡಾ॥ ಎಸ್.ವಿ.ಎಂ. ಅಧ್ಯಕ್ಷತೆಯಲ್ಲಿ ನಡೆದ, 2ನೇ ತಂಡದ ಉದ್ಘಾಟನೆಯ ಸರಳ ಸಮಾರಂಭದಲ್ಲಿ ಭಾಗವಹಿಸಿದ್ದ ಸಿರಿಮನೆ ನಾಗರಾಜ್ ಮಾತನಾಡುತ್ತ "ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಹಂತ ಮುಖ್ಯವಾಗಿ ವಿದ್ಯಾರ್ಥಿಗಳ ಮನೋಭಾವ ಮತ್ತು ದೃಷ್ಟಿಕೋನಗಳನ್ನು ರೂಪಿಸುವ ಹಂತ. ಇದು ಅವರು ಮುಂದೆ ರೂಢಿಸಿಕೊಳ್ಳಲಿರುವ ಮನೋಭಾವಕ್ಕೆ ತಳಹದಿ. ಈ ತಳಹದಿ ಆದಷ್ಟೂ ವಿಶಾಲವಾಗಿರುವುದು ಬಹಳ ಅಗತ್ಯ. ಯಾವುದೇ ಅಂಕೆ, ಯೋಜನೆ, ಚೌಕಟ್ಟಿಗೆ ಸಿಕ್ಕದೆ ದಿನ ದಿನವೂ ಹುಚ್ಚು ಕುದುರೆಯಂತೆ ದಿಕ್ಪಾಲಾಗಿ ಬೆಳೆಯುತ್ತಿರುವ ಇಂದಿನ ಸಮಾಜದಲ್ಲಿ ಹೆಚ್ಚೆಚ್ಚು ಜನ ಸಾಮಾಜಿಕ ಪ್ರಜ್ಞೆ, ಜವಾಬ್ದಾರಿ ಬೆಳೆಸಿಕೊಳ್ಳುವುದೊಂದೇ ಸಮಾಜದ ಉಳಿವಿಗೆ ಉಳಿದಿರುವ ದಾರಿ. ಆದರೆ ಜಾತಿ, 'ಧರ್ಮ', ಪ್ರಾಂತ, ಭಾಷೆ ಮುಂತಾಗಿ ಹಲವು ಹನ್ನೊಂದು ಬಗೆಯಲ್ಲಿ ಸಂಕುಚಿತತೆಗೇ ವಿಪುಲ ಅವಕಾಶವಿರುವ ಈ ಸಂದರ್ಭದಲ್ಲಿ ಪ್ರಜ್ಞಾವಂತಿಕೆಯ ತಳಹದಿಯೇ ಸಂಕುಚಿತವಾಗಿಬಿಟ್ಟರೆ, ವಿದ್ಯಾರ್ಥಿಗಳಲ್ಲಿ ಮುಂದೆ ವಿಶಾಲ ಮನೋಭಾವ ಬೆಳೆಯುವುದು ಅಸಂಭವವಾಗುತ್ತದೆ.

ಆದ್ದರಿಂದ, ವಿದ್ಯಾರ್ಥಿಗಳ ಮನೋಭಾವದ ತಳಹದಿ ರೂಪಿಸುವವರಾದ ಪ್ರಾಥಮಿಕ-ಮಾಧ್ಯಮಿಕ ಶಾಲಾ ಶಿಕ್ಷಕರ ಜವಾಬ್ದಾರಿ ಬಹಳ ಗುರುತರವಾದುದು" ಎಂದರು.

ಡಾ॥ ಎಸ್. ವಿ. ಎಂ. ಮಾತನಾಡಿ, "ಕಾಫಿಯ ಕನಿಷ್ಠ ಅರ್ಹತೆಯೆಂದರೆ ಅದು ಬಿಸಿಯಾಗಿರಬೇಕು ಎಂಬುದು". ಅಂತೆಯೇ ಯಾವುದೇ ಉದ್ಯೋಗಕ್ಕೆ ಕನಿಷ್ಠ ಅರ್ಹತೆ ಅದರಲ್ಲಿ ಆಸಕ್ತಿಯಿರುವುದು. ಆದ್ದರಿಂದ, ನಮ್ಮ ಎಷ್ಟೇ ಸಮಸ್ಯೆಗಳ ಮಧ್ಯೆಯೂ, ದೇಶದ ಭವಿಷ್ಯದ ಪ್ರಜೆಗಳನ್ನು ರೂಪಿಸುವ ನಾವುಗಳು ನಮ್ಮ ಕರ್ತವ್ಯದಲ್ಲಿ ಶ್ರದ್ಧೆ, ನಿಷ್ಠೆ ಸಡಿಲವಾಗಲು ಅವಕಾಶ ಕೊಡಬಾರದು ಎಂದು ಕರೆ ಕೊಟ್ಟರು.

ಬಿ.ವಿ. ಶಿವಮೂರ್ತಿ ಸ್ವಾಗತಿಸಿ, ದತ್ತಾತ್ರಿ ವಂದಿಸಿದರು.

ಶಿಬಿರ ಜುಲೈ 7ರವರೆಗೆ ಮುಂದುವರಿಯುತ್ತದೆ. ಹಾಗೂ ಇಡೀ ದೇಶಾದ್ಯಂತ ಏಕಕಾಲದಲ್ಲಿ ನಡೆಯುತ್ತಿದೆ.

## ಗ್ರಾಮೀಣ ಬದುಕಿಗೆ ನಿಷ್ಠವಾದ 'ತೀರ್ಥಹಳ್ಳಿ ಗ್ರಾಮಭಾರತಿ' ಬಿಡುಗಡೆ

ಗ್ರಾಮೀಣ ಪತ್ರಿಕೆಗಳು ಹೇಗಿರಬೇಕೆಂಬ ಬಗ್ಗೆ ಒಂದು ಮಾದರಿಯಾಗಬಲ್ಲ ನೂತನ ವಾರಪತ್ರಿಕೆಯೊಂದು ತೀರ್ಥಹಳ್ಳಿಯಲ್ಲಿ ಈಚೆಗೆ ಆರಂಭವಾಯಿತು.

ತೀರ್ಥಹಳ್ಳಿಯ ಟಿ. ರಘುವೀರ್ ಸಂಪಾದಕರಾಗಿರುವ ಈ ಪತ್ರಿಕೆ–"ತೀರ್ಥಹಳ್ಳಿ ಗ್ರಾಮ ಭಾರತಿ"–ಯ ಮೊದಲ ಸಂಚಿಕೆಯನ್ನು 'ಕನ್ನಡ ಪ್ರಭ' ಸಂಪಾದಕರಾದ ಖಾದ್ರಿ ಶಾಮಣ್ಣ ಅವರು ಜೂ॥ 4ರಂದು ಬಿಡುಗಡೆ ಮಾಡಿದರು.

ಮದ್ರಾಸಿನ 'ವೃತ್ತ ಪತ್ರಿಕಾಭಿವೃದ್ಧಿ ಸಂಶೋಧನಾ ಸಂಸ್ಥೆ'ಯ ಗ್ರಾಮೀಣ ಪತ್ರಿಕೆ ಯೋಜನೆಯ ನೆರವಿನೊಂದಿಗೆ ಮಲೆನಾಡಿನ ಮೂರು ತಾಲ್ಲೂಕುಗಳಿಂದ ಪ್ರಕಟಗೊಳ್ಳಲಿರುವ (ಸದ್ಯಕ್ಕೆ) ಮೂರು ಪತ್ರಿಕೆಗಳ ಪೈಕಿ ಮೊದಲನೆಯದಾಗಿರುವ ಈ ಪತ್ರಿಕೆಯ ರೂಪುರೇಷೆಗಳನ್ನು ಮೇಲ್ಕಂಡ ಸಂಸ್ಥೆಯ ನಿರ್ದೇಶಕರಾಗಿದ್ದ ಹಿರಿಯ ಪತ್ರಕರ್ತ ಸಿ. ಜಿ. ಕೆ. ರೆಡ್ಡಿಯವರು ವಿವರಿಸುತ್ತ, ಇದು ತೀರ್ಥಹಳ್ಳಿ ತಾಲ್ಲೂಕಿನ ಜನತೆಯ ಸ್ವಂತ ಪತ್ರಿಕೆಯಾಗಬೇಕು. ಅವರ ಸಮಸ್ಯೆಗಳು, ವಿಚಾರಗಳು, ಆಶೋತ್ತರಗಳು, ಈ ತಾಲ್ಲೂಕಿನ ಜನ ಜೀವನದ ಏಳು–ಬೀಳುಗಳು, ಆಗು ಹೋಗುಗಳು, ಅಭಿವೃದ್ಧಿ ಯತ್ನಗಳ ಸೋಲು–ಗೆಲವು–ಅನುಭವಗಳು — ಇವುಗಳಿಗೇ ಮೀಸಲು. ಇದರಲ್ಲಿ ರಾಜಕೀಯದ ವರದಿ, ವಿಮರ್ಶೆ, ಸಮೀಕ್ಷೆಗಳನ್ನು ಪ್ರಕಟಿಸದಿರಲು ಆದಷ್ಟು ಯತ್ನಿಸಲಾಗುತ್ತದೆ. ರಾಜ್ಯದ, ರಾಷ್ಟ್ರದ, ವಿಶ್ವದ ಯಾವ ಯಾವುದೋ ರಾಜಕೀಯಗಳ ಕಡೆಗೆ ಒತ್ತು ಕೊಡುವ ಬದಲು ಸಂಪೂರ್ಣವಾಗಿ ತೀರ್ಥಹಳ್ಳಿ ತಾಲ್ಲೂಕಿಗೇ ಗಮನ ಕೇಂದ್ರೀಕರಿಸಲಾಗುತ್ತದೆ ಎಂದರು.

ಮೊದಲಿಗೆ ಸುಮಾರು 40–50 ಜನ ಆಸಕ್ತರು, ಈ ಹಿರಿಯರು ಹಾಗೂ ಸಂಶೋಧನಾ ಸಂಸ್ಥೆಯ ನಿರ್ದೇಶಕ ಕೆ. ಎಸ್. ರಾಮಕೃಷ್ಣನ್ ಇವರುಗಳೊಂದಿಗೆ ವೃತ್ತಪತ್ರಿಕೆಗಳ ಸಮಗ್ರ ವಿಚಾರಗಳ ಬಗ್ಗೆ ಚರ್ಚೆ ನಡೆಸಿದರು.

ಈ ಯೋಜನೆಯಂತೆ, ಹೊಸದಾಗಿ ಪ್ರಾರಂಭವಾಗುವ ಒಂದು ಗ್ರಾಮೀಣ ಪತ್ರಿಕೆಗೆ (ಅದು ನೆರವಿಗೆ ಆಯ್ಕೆಯಾದಲ್ಲಿ) ಅದರ ಸಮಸ್ತ ಖರ್ಚು ವೆಚ್ಚಗಳೂ ಸಂಪಾದಕನ ಸಂಬಳವೂ ಸೇರಿದಂತೆ ಮೊದಲ ವರ್ಷದಲ್ಲಿ ಪೂರ್ತಿ ಖರ್ಚನ್ನೂ, 2ನೇ ವರ್ಷ ಶೇ. 75 ಭಾಗವನ್ನೂ 3ನೇ ವರ್ಷ ಶೇ. 50 ಭಾಗವನ್ನೂ ಈ ಸಂಸ್ಥೆ ವಹಿಸು

(4ನೇ ಪುಟಕ್ಕೆ)

## ನೀರಿಲ್ಲದೆಡೆ ಒಂದು ಬಾವಿಗೂ ಗತಿಯಿಲ್ಲ; ನೀರಿನ ಸಮಸ್ಯೆಯಿಲ್ಲದೆಡೆ ಮನೆಮನೆಗೆ ನಲ್ಲಿ!

(ವರದಿ: ಚಾವಲ್ಮನೆ ಸುರೇಶ್ ನಾಯಕ್)

ಹಾಲ್ಮುತ್ತೂರು: ಈ ಚಿಕ್ಕ ಊರಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ತೆರೆದ ಬಾವಿ ಮತ್ತು ಕೊಳವೆ ಬಾವಿಗಳಿದ್ದು, ನೀರಿನ ಸಮಸ್ಯೆ ಅಷ್ಟಾಗಿ ಕಾಣುತ್ತಿಲ್ಲ. ಆದರೂ ಈ ಹಿಂದೆ ಹತ್ತಿರದ ಬಾಗಿಹಳ್ಳದಿಂದ ಇಲ್ಲಿನ ಮನೆಗಳಿಗೆ ನಲ್ಲಿ ನೀರು ಸರಬರಾಜು ಮಾಡುವ ಯೋಜನೆಯೊಂದು ಹುಟ್ಟಿಕೊಂಡು ಊರಿನಲ್ಲಿ ನೆಲದೊಳಗೆ ಕೊಳವೆಗಳನ್ನು ಜೋಡಿಸಲಾಗಿತ್ತು.

ಈಗ ಆ ಯೋಜನೆ ಕೈ ಬಿಟ್ಟು ಕೊಳವೆ ಬಾವಿಯಿಂದ ನೀರು ಪೂರೈಕೆಯಂತೆ. **ಹೂತ ಪೈಪುಗಳನ್ನು ಕಿತ್ತು ಪುನಃ ಜೋಡಿಸಲಾಗುತ್ತಿದೆ!** ಅಕ್ಕ ಪಕ್ಕದ ಕಮ್ಮರಡಿ, ಬಂಡಿಗಡಿ ಈ ಎರಡೂ ಕಡೆ ಇಂಥ ಬೋರ್‌ವೆಲ್ ನೀರು ಪೂರೈಕೆ ಯೋಜನೆ ವಿಫಲವಾಗಿರುವುದಲ್ಲದೆ, ಮಲೆನಾಡಿನಲ್ಲಿ ಅಂತರ್ಜಲದ ಮಟ್ಟ ಕೆಳ ಕೆಳಗೆ ಹೋಗುತ್ತಿದೆಯೆಂಬ ವರದಿಗಳು ಸಹ ಇರುವಾಗ ಈ ಯೋಜನೆ ಸಫಲವಾಗುವ ಖಾತ್ರಿಯಿದೆಯೆ?

ಸುತ್ತ ಮುತ್ತಲ ಹತ್ತಾರು ಹಳ್ಳಿಗಳಲ್ಲಿ ಕುಡಿಯುವ ನೀರಿಗೆ ತೀವ್ರ ಹಾಹಾಕಾರವಿದ್ದು ಒಂದೆರಡು ಮೈಲಿಗಳಾಚೆಯಿಂದ ನೀರು ಹೊತ್ತು ತರುತ್ತಿದ್ದಾರೆ. ಸಚಿವರಿಗೂ ಸ್ಥಳೀಯ ಮುಖಂಡರಿಗೂ ಮನವಿ ಅರ್ಪಿಸಿ ಅರ್ಪಿಸಿ ಸುಸ್ತಾಗಿದ್ದಾರೆ. ಅಲ್ಲಿ ತಲಾ ಒಂದೊಂದು ಬಾವಿಗಳನ್ನಾದರೂ ತೆಗೆಸಲಾರದೆ ಸಾಕಷ್ಟು ನೀರಿರುವ ಈ ಊರಿನಲ್ಲಿ ಲಕ್ಷಾಂತರ ರೂಪಾಯಿ ಸುರಿಯುವ ಈ ನಿಷ್ಪ್ರಯೋಜಕ ಕಾಮಗಾರಿ ಯಾರ ಲಾಭಕ್ಕಾಗಿ? ಎಂದು ಜನ ಕೇಳುತ್ತಿದ್ದಾರೆ.

## ಕೊಪ್ಪ ತಾ॥: 1.2 ಕೋಟಿ ರೂ. ಕಾಮಗಾರಿ

ಕೊಪ್ಪ: ಈ ತಾ॥ನಲ್ಲಿ ಕಳೆದ ವರ್ಷ ಲೋಕೋಪಯೋಗಿ ಇಲಾಖೆ ವತಿಯಿಂದ 16 ಸೇತುವೆಗಳು, 2 ಕಟ್ಟಡಗಳು ಮತ್ತು 11 ಕಿ. ಮೀ. ಹೊಸ ರಸ್ತೆಯನ್ನು ಸುಮಾರು 1 2 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗಿದೆಯೆಂದು ಸಚಿವ ಗೋವಿಂದ ಗೌಡರು ತಿಳಿಸಿದ್ದಾರೆ.

ಜೂನ್ 2ರಂದು ಶಾಂತಿಗ್ರಾಮದಲ್ಲಿ 1 ಲಕ್ಷ ರೂ. ವೆಚ್ಚದಲ್ಲಿ ನಿರ್ಮಿಸಿರುವ ಕುಂಬಾರಗುಂಡಿ ಹಳ್ಳದ ಸೇತುವೆಯನ್ನೂ, ತಲಾ 20 ಸಾವಿರ ರೂ. ವೆಚ್ಚದ ಶಾಲಾ ಕೊಠಡಿ ಮತ್ತು ರಂಗ ಮಂದಿರ ಕಟ್ಟಡಗಳನ್ನೂ ಉದ್ಘಾಟಿಸಿ ಮಾತನಾಡುತ್ತಿದ್ದ ಅವರು, ಈ ವರ್ಷ ಈ ತಾ॥ ನಲ್ಲಿ ಸುಮಾರು 2 ಕೋಟಿ ರೂ. ವೆಚ್ಚದಲ್ಲಿ ಹಲವಾರು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುವುದೆಂದರು.

ಕಳೆದ ವರ್ಷ ಸಣ್ಣ ನೀರಾವರಿ ಇಲಾಖಾ ವತಿಯಿಂದ ಶೃಂಗೇರಿ, ಕೊಪ್ಪ ಮತ್ತು ನ. ರಾ. ಪುರ ತಾ॥ ಗಳಲ್ಲಿ ಪ್ರತಿಯೊಂದರಲ್ಲೂ ತಲಾ 30 ಕೆರೆಗಳನ್ನು ಅಭಿವೃದ್ಧಿ ಪಡಿಸಿರುವುದರ ಜೊತೆಗೆ 3 ಪಿಕ್ ಅಪ್‌ಗಳನ್ನು ನಿರ್ಮಿಸಲಾಗಿದೆ ಎಂದರು.

ಜಿಲ್ಲಾ ಯುವಜನಸೇವಾ ಮತ್ತು ಕ್ರೀಡಾಧಿಕಾರಿ ಎ. ಆರ್. ಮಂಜುನಾಥ್ ಮತ್ತು ತಹಸೀಲ್ದಾರ್ ಎಸ್. ಕರಿಗೌಡ ಮುಖ್ಯ ಅತಿಥಿಗಳಾಗಿದ್ದರು. ಕೆ. ಆರ್. ಚಂದ್ರಶೇಖರ್ ಮಾತನಾಡಿದರು. ಆನಂದ ರಾಮ ಭಟ್ ಅಧ್ಯಕ್ಷತೆ ವಹಿಸಿದ್ದರು. ಹೆಚ್. ಜಿ. ಶಿವಪ್ಪ ಸ್ವಾಗತಿಸಿ, ಕೆ. ಆರ್. ದೇವೇಂದ್ರ ವಂದಿಸಿದರು.

# ದಕ್ಷ ಠಾಣಾಧಿಕಾರಿ ಶಶಿಧರ್‌ಗೆ ವರ್ಗ

(ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಕಳೆದ ವರ್ಷವಷ್ಟೇ ಇಲ್ಲಿನ ಠಾಣಾಧಿಕಾರಿಯಾಗಿ ಬಂದಿದ್ದ ಶಶಿಧರ್ ತಮ್ಮ ಕೋರಿಕೆಯಂತೆ ಕಾರ್ಕಳ ಠಾಣೆಗೆ ವರ್ಗಾವಣೆ ಪಡೆದಿದ್ದಾರೆ.

ಬಹಳ ದಕ್ಷ ಮತ್ತು ಪ್ರಾಮಾಣಿಕ ಅಧಿಕಾರಿಯಾಗಿದ್ದ ಶಶಿಧರ್ ತುಂಬ ಕೊಳಕಾಗಿದ್ದ ಠಾಣೆಯ ಸ್ಥಿತಿಯನ್ನು ನಿರ್ಮಲಗೊಳಿಸಿ, ರೈಯವರ ನೆನಪನ್ನು ಪುನಃ ತಂದುಕೊಟ್ಟಿದ್ದರು. ಕೇವಲ ಕೆಲವೇ ಜನ ಜಾತಿವಾದಿಗಳ ಹೊರತು ಉಳಿದೆಲ್ಲಾ ಸಾಮಾನ್ಯ ಜನರೂ ಇವರು ಇನ್ನೂ ಬಹಳ ಕಾಲ ಇಲ್ಲೇ ಇರಬೇಕೆಂದು ಬಯಸಿದ್ದರು.

ಯಾವುದೇ ಸಣ್ಣ ಪ್ರಕರಣದಲ್ಲಾದರೂ ಖುದ್ದು ಪರಿಶೀಲನೆ ನಡೆಸುತ್ತ ಉತ್ತರು ಸಾರ್ವಜನಿಕ ಸಂಪರ್ಕ ಇಟ್ಟುಕೊಂಡಿದ್ದರೂ ಯಾರದೇ ಮುಲಾಜಿಗೂ ಒಳಗಾಗದ ವ್ಯಕ್ತಿತ್ವ ಅವರದಾಗಿತ್ತು.

ಒಬ್ಬ ಉತ್ತಮ ಅಧಿಕಾರಿ ಹೋದೊಡನೆ ಮತ್ತೊಬ್ಬ ಅದಕ್ಷ, ಅನೀತಿವಂತ ಅಧಿಕಾರಿ ಬಂದು ಠಾಣೆಯನ್ನೂ, ತಾಲ್ಲೂಕಿನ ಶಾಂತಿ ಸುವ್ಯವಸ್ಥೆಯನ್ನೂ ಕುಲಗೆಡಿಸುವ ಪರಿಪಾಠ ಈ ಹಿಂದೆ 2 ಬಾರಿ ನಡೆದಿದೆ. ಈಗಲಾದರೂ ಹಾಗೆ ಆಗದೆ, ಈಗಿನ ಸುವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗುವಂಥ ದಕ್ಷ ಅಧಿಕಾರಿಯನ್ನು ಜನತೆ ನಿರೀಕ್ಷಿಸುತ್ತಿದ್ದಾರೆ.

## ಕೆಮ್ಮಣ್ಣುಗುಂಡಿಯಲ್ಲಿ ಶ್ರಮದಾನ ಶಿಬಿರ

ಚಿಕ್ಕಮಗಳೂರು: ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಕೆಮ್ಮಣ್ಣುಗುಂಡಿಯಲ್ಲಿ 'ಯುವಜನ ನಿಲಯ'ವೆಂಬ ಪ್ರವಾಸಿ ವಸತಿ ಸಮುಚ್ಚಯವೊಂದನ್ನು ಹೊಂದಿದ್ದು ಇದೀಗ ಬಹಳ ಹೀನ ಅವಸ್ಥೆಯಲ್ಲಿರುವ ವಿಚಾರ ಈಗಾಗಲೇ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಆದರೆ ಅವು ಬಾಡಿಗೆ ಕಟ್ಟಡಗಳಾದ್ದರಿಂದ ಇಲಾಖೆಯ ವತಿಯಿಂದ ಅದನ್ನು ದುರಸ್ತಿ ಮಾಡಿಸುವುದಕ್ಕೆ ಕಾನೂನಿನ ತೊಡಕುಗಳಿರುವುದರಿಂದ ಇವುಗಳ ದುರಸ್ತಿ ಮತ್ತು ಪರಿಸರ ನೈರ್ಮಲ್ಯೀಕರಣಕ್ಕಾಗಿ 12-6-86ರಿಂದ 18-6-86 ಮತ್ತು 20-6-86ರಿಂದ 26-6-86ರವರೆಗೆ ಎರಡು ಶ್ರಮ ದಾನ ಶಿಬಿರಗಳನ್ನು ಇಲಾಖೆ ಯೋಜಿಸಿದೆ. ಇವುಗಳಲ್ಲಿ ಜಿಲ್ಲೆಯ ಗ್ರಾಮೀಣ ಪ್ರದೇಶಗಳಿಂದ ಆಯ್ದ ತಲಾ 50 ಮಂದಿ ಯುವಕರು ಪಾಲ್ಗೊಳ್ಳಲಿದ್ದಾರೆ ಎಂದು ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿ ಎ. ಆರ್. ಮಂಜುನಾಥ್ ಪ್ರಕಟಣೆಯೊಂದರಲ್ಲಿ ತಿಳಿಸಿದ್ದಾರೆ.

# ನೀರು, ದೀಪ ಇಲ್ಲದೆ ತತ್ತರಿಸಿದ ಕೊಪ್ಪ

(ಒಂದನೆಯ ಪುಟದಿಂದ)

ಆದರೆ ಹಿರೀಕೆರೆಯ ನೀರು ಫೆಬ್ರವರಿ-ಮಾರ್ಚ್ ನಂತರ ಕೊಚ್ಚೆ ರಾಡಿಯಾಗಿರುತ್ತದೆ. ಆ ವೇಳೆಯಲ್ಲಿ ಮಾತ್ರವಲ್ಲ, ಜುಲೈ-ಆಗಸ್ಟ್‌ನಲ್ಲಿ ಕೂಡ ಅದು ಕುಡಿಯಲು ಅಯೋಗ್ಯವೆಂದು ವೈದ್ಯರಿಂದ ಸರ್ಟಿಫಿಕೇಟ್ ಪಡೆದುಕೊಳ್ಳುವನ್ನು ಕೆಟ್ಟಿದೆ. ಈ ವರ್ಷವೇನೋ ಸ್ವಲ್ಪ ಕೆಸರು, ಕೊಳೆತ ಎಲೆಗಳನ್ನು ತೆಗೆಸಿದ್ದಾರಂತೆ. ಆದರೂ ನೀರೇನೂ ಸ್ವಚ್ಛವಾಗಿಲ್ಲ.

ಆದ್ದರಿಂದ ಮುಖ್ಯಾಧಿಕಾರಿಗಳು ಮೇಲೆ ಹೇಳಿದಂಥ ಸುಧಾರಣೆಯ ಜೊತೆಗೆ ಸೋರುವ ತೊಟ್ಟಿಯೂ ತುರ್ತಾಗಿ ಅದಲ್ಲಿ ಹಿರೀಕೆರೆಯ ನೀರನ್ನು ಸಹ ಬಳಸಲು ಸಾಧ್ಯವಾಗುತ್ತದೆ. ಆಗ ಇಂಥ ಪರಿಸ್ಥಿತಿ ನಿಭಾಯಿಸಲು ಇನ್ನಷ್ಟು ಅನುಕೂಲವಾಗುತ್ತದೆ

ಈ ಯೋಜನೆಗೆ 10 ಲಕ್ಷ ರೂ. ಬಜೆಟ್ ಮಂಜೂರಾತಿ ದೊರೆತಿದೆಯೆನ್ನಲಾಗಿದೆ. ಆದರೆ ನಗರ ನೀರು ಸರಬರಾಜು ಮಂಡಳಿ 23 ಲಕ್ಷ ರೂ.ಗಳ ಪರಿಷ್ಕೃತ ಅಂದಾಜನ್ನು ಮಂಜೂರಾತಿಗಾಗಿ ಕಳಿಸಿ ಕೊಟ್ಟಿದೆ. ಅಂತೂ ಸದ್ಯದಲ್ಲೇ ಹರಿಹರಪುರದಲ್ಲಿ 60 ಅಶ್ವಶಕ್ತಿಯ ಮೋಟರನ್ನು ಜೋಡಿಸಲಾಗುವುದೆಂದು ತಿಳಿದು ಬಂದಿದೆ.

**ಸಚಿವರು ಪಟ್ಟು ಹಿಡಿದು 23 ಲಕ್ಷ ರೂ. ಪರಿಷ್ಕೃತ ಯೋಜನೆಗೆ ಮಂಜೂರಾತಿ ದೊರಕಿಸಿ ಕೊಂಡಲ್ಲಿ ಮಾತ್ರ ಪರಿಸ್ಥಿತಿ ಸ್ವಲ್ಪ ಆಶಾದಾಯಕವಾಗಿರುತ್ತದೆ.**

**ಜೊತೆಗೆ ಕೊಪ್ಪ ವಿದ್ಯುತ್ ಪೂರೈಕೆಯಲ್ಲೂ ಸಹ ಸಾಧ್ಯವಿದ್ದಷ್ಟು ಪರ್ಯಾಯ ವ್ಯವಸ್ಥೆಗೆ ಅವಕಾಶ ಕಲ್ಪಿಸುವತ್ತ ಇಲಾಖೆ ಕ್ರಮ ಕೈಗೊಳ್ಳಬೇಕಾಗಿದೆ. ಹೊಸ ವ್ಯವಸ್ಥೆ ಮಾಡಿದಾಗ ಸೌಕರ್ಯ ಹೆಚ್ಚಬೇಕೇ ಹೊರತು ಇದ್ದ ಸೌಕರ್ಯವೂ ತಪ್ಪಿ ಹೋಗುವುದು ಅಭಿವೃದ್ಧಿಯ, ಸುಧಾರಣೆಯ ಲಕ್ಷಣವಲ್ಲ.**

## ಅಡಿಕೆ ಧಾರಣೆ

**ಶಿವಮೊಗ್ಗ**

**ತಾ|| 7.6.1986**

| | |
|---|---|
| ಸರಕು: | 2850 – 3080 |
| ಬೆಟ್ಟೆ: | 1689 – 1910 |
| ಗೊರಬಲು: | 861 – 1209 |

**ಸಾಗರ**

**ತಾ|| 7.6.8**

| | |
|---|---|
| ಚಾಲಿ: | ರೂ. 1630 – 1930 |
| ಸಿಪ್ಪೆ ಗೋಟು: | ರೂ. 559 – 859 |
| ಆಪಿ: | ರೂ. 3569 – 3839 |

## ಏಲಕ್ಕಿ ಧಾರಣೆ

ಏಲಕ್ಕಿ ಮಂಡಳಿ ಹರಾಜು ಡಿಪೋ

| ತಾರೀಕು | ಗರಿಷ್ಠ | ಸರಾಸರಿ |
|---|---|---|
| 17.5.86 | 181 | 70 |
| ಶಿವಮೊಗ್ಗ ಮ್ಯಾಮ್ಕೋಸ್ | | |
| 24.5.86 | 133 | 67 |

21.6.86ಕ್ಕೆ ಮ್ಯಾಮ್ಕೋಸ್‌ನಲ್ಲಿ ಏಲಕ್ಕಿ ವ್ಯಾಪಾರ ಇದೆ

| | | |
|---|---|---|
| ಸಿರ್ಸಿ | | |
| 21.5.86 | 131 | 94 |

## ತೀರ್ಥಹಳ್ಳಿ ಗ್ರಾಮಭಾರತಿ

(3ನೇ ಪುಟದಿಂದ)

ತ್ತದೆ. ಈ ಸಂಸ್ಥೆ ಸಾಗರದಲ್ಲಿ ಸ್ಥಾಪಿಸಿರುವ ಸುಸಜ್ಜಿತ ಆಧುನಿಕ ಮುದ್ರಣಾಲಯದಲ್ಲಿ ಪತ್ರಿಕೆ ಮುದ್ರಣಗೊಳ್ಳುತ್ತದೆ. ಈ 3 ವರ್ಷಗಳಲ್ಲಿ ಪತ್ರಿಕೆ ತನ್ನ ಕಾಲ ಮೇಲೇ ನಿಂತು ನಡೆಯುವಂತಾಗಬೇಕೆಂಬುದು ಸಂಸ್ಥೆಯ ಯೋಜನೆ.

ಸದ್ಯಕ್ಕೆ ಪ್ರಾಯೋಗಿಕವಾಗಿ ತೀರ್ಥಹಳ್ಳಿ, ಸಾಗರ ಮತ್ತು ಸೊರಬ ತಾ|| ಗಳಿಂದ ಪತ್ರಿಕೆಗಳು ಆರಂಭವಾಗಲಿದ್ದು, ಈ ಯೋಜನೆಯನ್ನು ಮಲೆನಾಡಿನ ಇತರ ತಾ|| ಗಳಿಗೂ ವಿಸ್ತರಿಸಲು ಸಿದ್ಧವಿರುವುದಾಗಿ ರೆಡ್ಡಿಯವರು 'ಮುಂಜಾವು'ಗೆ ತಿಳಿಸಿದರು.







ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.